ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1749

ಸದಸ್ಯರ ಹೆಸರು : ಶ್ರೀ ಪಿ.ಆರ್ ರಮೇಶ್ (ನಾಮ ನಿರ್ದೇಶನ ಹೊಂದಿದವರು)

ಉತ್ತರಿಸುವ ದಿನಾಂಕ : 14.03.2022

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕನ್ನಡ ನಾಡಿನ ಹೆಸರಾಂತ ಚಲನಚಿತ್ರ ಕಲಾವಿದ ಡಾ.ವಿಷ್ಣುವರ್ಧನ್‌ರವರ ಸಮಾಧಿಯ ಸ್ಮಾರಕವನ್ನು ನಿರ್ಮಾಣ ಮಾಡಲು ಸರ್ಕಾರಕ್ಕೆ ಇರುವ ತೊಡಕುಗಳೇನು?(ವಿವರ ನೀಡುವುದು) | ಡಾ.ವಿಷ್ಣುವರ್ಧನ್‌ರವರ ಸ್ಮಾರಕವನ್ನು ಬೆಂಗಳೂರಿನಲ್ಲಿ ನಿರ್ಮಿಸಲು ಉದ್ದೇಶಿಸಿ, ಸರಕಾರವು ಮಂಜೂರಿಸಿದ ಜಮೀನಿಗೆ ಸಂಬಂಧಿಸಿದಂತೆ ನ್ಯಾಯಾಲಯದಲ್ಲಿ ಪ್ರಕರಣಗಳು ದಾಖಲಾದ ಹಿನ್ನೆಲೆಯಲ್ಲಿ, ಮೈಸೂರು ತಾಲ್ಲೂಕು, ಕಸಬಾ ಹೋಬಳಿ, ಹಾಲಾಳು ಗ್ರಾಮದ ಐದು ಎಕರೆ ಜಮೀನಿನಲ್ಲಿ ಸ್ಮಾರಕ ನಿರ್ಮಾಣ ಮಾಡಲು ನಿರ್ಧರಿಸಿ ಸ್ಥಳಾಂತರಿಸಿದ್ದು, ಸದರಿ ಜಮೀನಿಗೆ ಸಂಬಂಧಿಸಿದಂತೆ ಪ್ರಸ್ತುತ ನ್ಯಾಯಾಲಯದ ತಡೆಯಾಜ್ಞೆ ತೆರವುಗೊಂಡಿರುವುದರಿಂದ ಕಾಮಗಾರಿ ಪ್ರಾರಂಭವಾಗಿ ಪ್ರಗತಿಯಲ್ಲಿರುತ್ತದೆ. |
| ಆ) | ಸದರಿ ಸ್ಮಾರಕ ನಿರ್ಮಾಣ ಮಾಡಲು ಇರುವ ತೊಡಕುಗಳನ್ನು ಕಾನೂನಾತ್ಮಕವಾಗಿ ನಿವಾರಣೆ ಮಾಡಲು ಸರ್ಕಾರವು ಮಂದಗತಿಯ ದೋರಣೆಗೆ ಕಾರಣಗಳೇನು?(ವಿವರ ನೀಡುವುದು) | ಸದರಿ ಸ್ಮಾರಕ ನಿರ್ಮಾಣವು ನ್ಯಾಯಾಲಯದ ಪ್ರಕರಣಗಳಿಂದಾಗಿ ವಿಳಂಬವಾಗಿದ್ದು, ಪ್ರಸ್ತುತ ಸರ್ಕಾರ ಡಾ.ವಿಷ್ಣುವರ್ಧನ್ ಸ್ಮಾರಕ ಭವನ ನಿರ್ಮಾಣ ಕಾಮಗಾರಿಯನ್ನು ರೂ.11.00 ಕೋಟಿಗಳ ವೆಚ್ಚದಲ್ಲಿ ಕೈಗೊಳ್ಳಲು ಕರ್ನಾಟಕ ರಾಜ್ಯ ಪೋಲೀಸ್ ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ನಿಗಮಕ್ಕೆ ವಹಿಸಿ ಅನುಮತಿ ನೀಡಿರುತ್ತದೆ. ಅದರಂತೆ, ಸ್ಮಾರಕದ ಕಾಮಗಾರಿಯು ಶೀಘ್ರಗತಿಯಲ್ಲಿ ನಡೆಯುತ್ತಿದೆ. |
| ಇ) | ಸರ್ಕಾರದಿಂದ ಸದರಿ ಸ್ಮಾರಕ ನಿರ್ಮಾಣವನ್ನು ಯಾವ ಕಾಲಾವಧಿಯೊಳಗೆ ಮುಗಿಸಲು ಸರ್ಕಾರ ಚಿಂತಿಸಿದೆ?(ವಿವರ ನೀಡುವುದು) | ಡಾ.ವಿಷ್ಣುವರ್ಧನ್ ಸ್ಮಾರಕ ಭವನ ನಿರ್ಮಾಣ ಕಾಮಗಾರಿಯನ್ನು ಕರ್ನಾಟಕ ರಾಜ್ಯ ಪೋಲೀಸ್ ವಸತಿ ಮತ್ತು ಮೂಲಸೌಲಭ್ಯ ಅಭಿವೃದ್ಧಿ ನಿಗಮವು ನಿರ್ವಹಿಸುತ್ತಿದ್ದು, ಆಗಸ್ಟ್-2022ರೊಳಗಾಗಿ ಸ್ಮಾರಕ ಭವನ ನಿರ್ಮಾಣದ ಕಾಮಗಾರಿಯನ್ನು ಪೂರ್ಣಗೊಳಿಸಲು ಕ್ರಮವಹಿಸಲಾಗುವುದು. |

ಸಂಖ್ಯೆ: ಕಸಿಐ-ಪಿಐಪಿ/68/2022

(ಬಸವರಾಜ ಬೊಮ್ಮಾಯಿ)

ಮುಖ್ಯಮಂತ್ರಿ